ದ್ರುಮಂ । ಕೋಯಷ್ಟಿಕೈಶ್ಚಾರ್ಜುನಕೈಶ್ಶತಪತ್ರೈಶ್ಚ ಕೀರಕೈಃ ॥ ಏತೈಶ್ಚಾನ್ಯೈಶ್ಚ ವಿಹಗೈರ್ನಾದಿತಂ ತು ವನಂ ಮಹತ್ । ತತೋ ಜಗ್ಮತುರವ್ಯಗ್ರೌ ರಾಘವೌ ಸುಸಮಾಹಿತೌ । ತದ್ವನಂ ಚೈವ ಸರಸಃ ಪಶ್ಯಂತೌ ಶಕುನೈರ್ಯುತಂ ॥೧೯॥ ಸ ದದರ್ಶ ತತಃ ಪಂಪಾಂ ಶೀತವಾರಿನಿಧಿಂ ಶುಭಾಂ । ತಿಲಕಾಶೋಕಪುನ್ನಾಗವಕುಳೋದ್ದಾಲಕಾಶಿನೀಂ ॥೨೦॥ ಸ ರಾಮೋ ವಿವಿಧಾನ್ವೃಕ್ಷಾನ್ಸರಾಂಸಿ ವಿವಿಧಾನಿ ಚ । ಪಶ್ಯನ್ಕಾಮಾಭಿಸಂತಪ್ತೋ ಜಗಾಮ ಪರಮಂ ಹ್ರದಂ ॥೨೧॥ ಪುಷ್ಪಿತೋಪವನೋಪೇತಾಂ ಸಾಲಚಂಪಕಶೋಭಿತಾಂ । ಷಟ್ಪದೌಘಸಮಾವಿಷ್ಟಾಂ ಶ್ರೀಮತೀಮತುಲಪ್ರಭಾಂ । ಸ್ಫಟಿಕೋಪಮತೋಯಾಢ್ಯಾಂ ಶ್ಲಕ್ಷ್ಣವಾಲುಕಸಂತತಾಂ । ಸ ತಾಂ ದೃಷ್ಟ್ವಾ ಪುನಃ ಪಂಪಾಂ ಪದ್ಮಸೌಗಂಧಿಕೈರ್ಯುತಾಂ । ಇತ್ಯುವಾಚ ತದಾ ವಾಕ್ಯಂ ಲಕ್ಷ್ಮಣಂ ಸತ್ಯವಿಕ್ರಮಃ ॥೨೪॥ ಅಸ್ಯಾಸ್ತೀರೇ ತು ಪೂರ್ವೋಕ್ತಃ ಪರ್ವತೋ ಧಾತುಮಂಡಿತಃ । ಋಶ್ಯಮೂಕ ಇತಿ ಖ್ಯಾತಃ ಪುಣ್ಯಃ ಪುಷ್ಪಿತಪಾದಪಃ ॥೨೫॥ ಹರೇರೃಕ್ಷರಜೋನಾಮ್ನಃ ಪುತ್ರಸ್ತಸ್ಯ ಮಹಾತ್ಮನಃ । ಅಧ್ಯಾಸ್ತೇ

---

ಪಂಪಾಂ-ಪಂಪಾನದಿಯನ್ನು. ಸಮೀಕ್ಷಮಾಣೌ-ನೋಡುತ್ತಿರುವರಾಗಿ, ಸರ್ವತಃ-ಎಲ್ಲಾ ಕಡೆಯಲ್ಲಿಯೂ, ವಿಪುಲದ್ರುಮಂ-ವಿಸ್ತಾರವಾದ ವೃಕ್ಷಗಳುಳ್ಳ, ಪುಷ್ಪಾಢ್ಯಂ-ಪುಷ್ಪಗಳಿಂದ ತುಂಬಿರುವ, ಕೋಯಷ್ಟಿಕೈಃ-ಪಕ್ಷಿವಿಶೇಷಗಳಿಂದಲೂ, ಅರ್ಜುನಕೈಃ-ಛಲ್ಲಗಿರುವ, ಶತಪತ್ರೈಶ್ಚ-ದೂರ್ವಾಘಾಟಿಗಳೆಂಬ ಪಕ್ಷಿ ವಿಶೇಷಗಳಿಂದಲೂ, ಕೀರಕೈಃ-ಗಿಣಿಗಳಿಂದಲೂ. ಏತೈಃ-ಈ ಪಕ್ಷಿಗಳಿಂದಲೂ, ಅನ್ಯೈಶ್ಚ-ಮತ್ತು ಕೇಬಾದ, ವಿಹಗೈಃ-ಪಕ್ಷಿಗಳಿಂದಲೂ, ನಾದಿತಂ-ಧ್ವನಿಗೊಳಿಸುತ್ತಿರುವ, ಮಹತ್-ದೊಡ್ಡದಾದ, ವನಂ-ವನವನ್ನು. ಸಮೀಕ್ಷ್ಯಮಾಣೌ-ನೋಡುತ್ತಿರುವರಾಗಿ, ತತಃ-ಬಳಿಕ, ಅವ್ಯಗ್ರೌ-ಜಾಗ್ರತೆಯುಳ್ಳ. ರಾಘವೌ-ರಾಮಲಕ್ಷ್ಮಣರೀರ್ವರು, ಸುಸಮಾಹಿತೌ-ಸಮಾಧಾನಚಿತ್ತರಾಗಿ, ಸರಸಃ-ಮತಂಗಸರೋವರದ ಸಂಬಂಧವಾದ. ಶಕುನೈಃ-ಪಕ್ಷಿಗಳಿಂದ, ಯುತಂ-ಕೂಡಿಕೊಂಡಿರುವ, ತದ್ವನಂ-ಆ ವನವನ್ನು, ಪಶ್ಯಂತೌ-ನೋಡುತ್ತಿರುವರಾಗಿ, ಜಗ್ಮತುಃ-ತೆರಳಿದರು ॥೧೯॥ ಸಃ-ಆ ಶ್ರೀರಾಮನು, ತತಃ-ಬಳಿಕ, ಶೀತವಾರಿನಿಧಿಂ-ತಣ್ಣಗಿರುವ ನೀರಿಗೆ ನಿಕ್ಷೇಪರೂಪವಾದ, ಶುಭಾಂ-ಶುಭಕರವಾದ, ತಿಲಕಾಶೋಕಪುನ್ನಾಗವಕುಳೋದ್ದಾ,ಲಕಾಶಿನೀಂ-ತಿಲಕ ವೃಕ್ಷಗಳಿಂದಲೂ ಅಶೋಕವೃಕ್ಷಗಳಿಂದಲೂ ಪುನ್ನಾಗ ಗಿಡಗಳಿಂದಲೂ, ಹವ್ವದ ಗಿಡಗಳಿಂದಲೂ, ಚಳ್ಳೇಗಿಡಗಳಿಂದಲೂ, ಪ್ರಕಾಶಿಸುತ್ತಿರುವ ಪಂಪಾಂ-ಪಂಪಾನದಿಯನ್ನು, ದದರ್ಶ-ಕಂಡನು ॥೨೦॥ ಸರಾಮಃ-ಆ ಶ್ರೀರಾಮನು. ವಿವಿಧಾನ್-ನಾನಾಬಗೆಗಳಾದ, ವೃಕ್ಷಾನ್-ಗಿಡಗಳನ್ನು, ವಿವಿಧಾನಿ-ನಾನಾಬಗೆಗಳಾದ, ಸರಾಂಸಿ-ಸರೋವರಗಳನ್ನು, ಪಶ್ಯನ್-ನೋಡುತ್ತಿರುವವನಾಗಿ, ಕಾಮಾಭಿಸಂತಪ್ತಃ-ಕಾಮೋದ್ರೇಕದಿಂ ಪರಿತಪ್ತನಾಗಿ, ಪರಮಂ-ಸರ್ವೋತ್ಕೃಷ್ಟವಾದ, ಹ್ರದಂ-ಸರೋವರವನ್ನು ಕುರಿತು, ಜಗಾಮ-ಐದಿದನು ॥೨೧॥ ಸತ್ಯವಿಕ್ರಮಃ-ಸತ್ಯದಿಂ ಪರಾಕ್ರಮವಾದತಕ್ಕ, (ಅಥವಾ-ಸತ್ಯವೂ ಪರಾಕ್ರಮವೂ ವುಳ್ಳ, ಸಃ-ಆ ಶ್ರೀರಾಮನು. ಪುಷ್ಪಿತೋಪವನೋಪೇತಾಂ-ಪುಷ್ಪಿತ-ಹುಷ್ಪಬಿಟ್ಟಿರುವ, ಉಪವನ-ತೋಟಗಳಿಂದ, ಉಪೇತಾಂ-ಕೂಡಿಕೊಂಡಿರುವ, ಸಾಲಚಂಪಕಶೋಭಿತಾಂ-ಸಾಲವೃಕ್ಷಗಳಿಂದಲುಂ ಸಂಪಿಗೆ ಗಿಡಗಳಿಂದಲುಂ ಪ್ರಕಾಶಿಸುತ್ತಿರುವ, ಷಟ್ಪದೌಘಸಮಾವಿಷ್ಟಾಂ-ಭ್ರಮರ ತಂಡಗಳಿಂದ ಕೂಡಿಕೊಂಡಿರುವ, ಶ್ರೀಮತೀಂ-ಸಂಪದ್ಯುಕ್ತವಾದ, ಅತುಲಪ್ರಭಾಂ-ಸಮಾನವಿಲ್ಲದ ಕಾಂತಿಯುಳ್ಳ. ಸ್ಫಟಿಕೋಪಮತೋಯಾಢ್ಯಾಂ-ಸ್ಫಟಿಕಮಣಿಗಳಿಗೆ ಸಮಾನವಾದ ಉದಕಗಳಿಂದ ಪ್ರಕಾಶಿಸುವ. ಶ್ಲಕ್ಷ್ಣವಾಲುಕಸಂತತಾಂ-ಮೃದುವಾದ ಮರಳಿನಿಂದ ವ್ಯಾಪ್ತವಾಗಿರುವ, ಪದ್ಮಸೌಗಂಧಿಕೈರ್ಯುತಾಂ-ಕಮಲಗಳಿಂದಲೂ ಪುಷ್ಪಗಳಿಂದಲೂ ಕೂಡಿಕೊಂಡಿರುವ. ತಾಂಪಂಪಾಂ-ಆ ಪಂಪಾನದಿಯನ್ನು. ಪುನಃ-ಮತ್ತು, ದೃಷ್ಟ್ವಾ-ಕಂಡು, ತದಾ-ಆ ಕಾಲದಲ್ಲಿ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯಂಕುರಿತು, ವಾಕ್ಯಂ-ಮಾತನ್ನು. ತದಾ-ತತ್‍ಕ್ಷಣದಲ್ಲಿ. ಇತಿ-ಈಪರಿಯಾಗಿ, ಉವಾಚ-ಪೇಳಿದನು ॥೨೪॥ ಅಸ್ಯಾಂ-ಈ ಪಂಪಾನದಿಯ. ತೀರೇತು-ದಡದಲ್ಲಿ, ಪೂರ್ವೋಕ್ತಃ-ಪೂರ್ವದಲ್ಲಿ ಕಬಂಧನಿಂ ಪೇಳಲ್ಪಟ್ಟ, ಧಾತುಮಂಡಿತಃ-ಗೈರಿಕಾದಿ ಧಾತುಗಳಿಂ ಅಲಂಕೃತಮಾದ, ಪುಣ್ಯಃ-ಪುಣ್ಯಕರವಾದ. ಪುಷ್ಪಿತಪಾದಪಃ-ಹುವ್ವುಬಿಟ್ಟಿರುವ ಮರಗಳುಳ್ಳ, ಋಶ್ಯಮೂಕಇತಿ-ಋಶ್ಯಮೂಕವೆಂದು, ಖ್ಯಾತಃ-ಪ್ರಸಿದ್ಧವಾದ. ಪರ್ವತಃ-ಬೆಟ್ಟವು, ಅಸ್ತಿ-ಇಧೆ ॥೨೫॥ ವೃಕ್ಷರಜೋನಾಮ್ನಃ-ಋಕ್ಷರಜಸ್ಸೆಂಬ ಹೆಸ

---

ಗೆಗಿಡಗಳಿಂದಲೂ, ಮತ್ತೂ ಇತರವಾದ ವೃಕ್ಷಗಳಿಂದಲೂ ಸಹಾ ಸಯುಕ್ತವಾದ, ಹೆಂಗಸಿನಂತಿರುವ ಪಂಪಾನದಿಯಂ ನೋಡುವವರಾಗಿ, ಸುತ್ತುಮುತ್ತಲೂ ವಿಸ್ತಾರವಾದ ವೃಕ್ಷಂಗಳುಳ್ಳದ್ದಾಗಿಯೂ, ಮತ್ತೂ "ಅರ್ಜುನಕ, ಶತಪತ್ರ, ಕೋಯಷ್ಟಿಕ, ಶುಕ" ಎಂಬ ಈ ಪಕ್ಷಿಗಳಿಂದಲೂ ಇತರಪಕ್ಷಿಗಳಿಂದಲೂ, ಸಹಾ ಯುಕ್ತವಾಯೂ ಇರುವ ಒಂದಾನೊಂದು ವನವಂ ನೋಡುತ್ತಾ ತೆರಳಿದರು ॥೧೯॥ ಅನಂತರದಲ್ಲಿ ಶ್ರೀರಾಮನು ತಣ್ಣೀರಿಗೆ ನಿಕ್ಷೇಪವಾದ ಮತ್ತೂ "ತಿಲಕ, ಅಶೋಕ, ಪುನ್ನಾಗ, ವಕುಳ, ಉದ್ದಾಲಕ," ಎಂಬ ವೃಕ್ಷವಿಶೇಷಗಳಿಂದ ಪ್ರಕಾಶಿಸುತಲಿರುವ ಪಂಪಾನದಿಯನ್ನು ನೋಡಿದನು ॥೨೦॥ ಬಳಿಕ ಆ ಶ್ರೀರಾಮನು ನಾನಾ ವಿಧವಾದ ವೃಕ್ಷಗಳನ್ನೂ, ಸರೋವರಗಳನ್ನೂ ಸಹಾ ನೋಡಿದವನಾಗಿ, ಕಾಮಬಾಧೆಯಿಂದ ನೊಂದು ಆ ಸರೋವರವನ್ನೈದಿದನು ॥೨೧॥ ಸತ್ಯವಾದ ಪರಾಕ್ರಮವುಳ್ಳ ಆ ಶ್ರೀರಾಮನು ಸಂಜಾತಪುಷ್ಪಂಗಳುಳ್ಳ ವನಗಳಿಂದ ಯುಕ್ತವಾಗಿಯೂ, ಸಾಲವೃಕ್ಷಗಳಿಂದ ಸಂಪಿಗೆ ಮರಗಳಿಂದಲೂ ಸಹಾ ಎಸೆವುದಾಗಿಯೂ, ದುಂಬಿಗಳ ತಂಡಗಳಿಂದ ವ್ಯಾಪ್ತವಾಗಿಯೂ, ಬಹು ಬೆಳಗುವದಾಗಿಯೂ, ಸ್ಫಟಿಕಮಣಿಗಳಂತೆ ನಿರ್ಮಲವಾದ ಉದಕವುಳ್ಳದ್ದಾಗಿಯೂ, ಮೃ

ತಂಮಹಾವೀರ್ಯಸ್ಸುಗ್ರೀವಇತಿವಿಶ್ರುತಃ ।೨೬। ಸುಗ್ರೀವಮಭಿಗಚ್ಛ ತ್ವಂವಾನರೇಂದ್ರಂನರರ್ಷಭ । ಇತ್ಯುವಾಚ
ಪುನರ್ವಾಕ್ಯಂಲಕ್ಷ್ಮಣಂಸತ್ಯವಿಕ್ರಮಂ ।೨೭। ರಾಜ್ಯಭ್ರಷ್ಟೇನದೀನೇನತಸ್ಯಾಮಾಸಕ್ತಚೇತಸಾ । ಕಥಂಮಯಾವಿ
ನಾಶಕ್ಯಾಸೀತಾಂಲಕ್ಷ್ಮಣಜೀವಿತುಂ ।೨೮।ಇತ್ಯೇವಮುಕ್ತ್ವಾಮದನಾಭಿಪೀಡಿತಸ್ಸಲಕ್ಷ್ಮಣಂವಾಕ್ಯಮನನ್ಯಚೇತಸಂ
ವಿವೇಶಪಂಪಾಂತಟಿನೀಂಮನೋರಮಾಂರಘೂತ್ತಮಶ್ಶೋಕವಿಷಾದಯಂತ್ರಿತಃ।೨೯।ತತೋಮಹದ್ವರ್ತ್ಮಸುದೂರಸಂ
ಕ್ರಮಂಕ್ರಮೇಣಗತ್ವಾಪ್ರತಿಕೂಲಧನ್ವನಂ । ದದರ್ಶಪಂಪಾಂಶುಭದರ್ಶಕಾನನಾಮನೇಕನಾನಾವಿಧಪಕ್ಷಿಜಾಲಕಾಂ
ಇತ್ಯಾರ್ಷೇಶ್ರೀಮದ್ರಾಮಾಯಣೆ-ಆದಿಕಾವ್ಯೇ-ಶ್ರೀಮದ್ವಾಲ್ಮೀಕೀಯೇ-ಚತುರ್ವಿಂಶತ್ಸಹಸ್ರಿಕಾಯಾಂಸಂಹಿತಾಯಾಂ

—**ಶ್ರೀಮದಾರಣ್ಯಕಾಂಡೆ-ಪಂಚಸಪ್ತತಿತಮಸ್ಸರ್ಗಃ**—

ರುಳ್ಳ, ತಸ್ಯ-ಆ ಪ್ರಸಿದ್ಧನಾದ, ಮಹಾತ್ಮನಃ-ಮಹಾ ಧೈರ್ಯವಂತನಾದ, ಹರೇಃ-ವಾನರನ, ಪುತ್ರಃ-ಕುವರನಾದ. ಮಹಾವೀರ್ಯಃ-ಮಹಾ ಪರಾಕ್ರಮಶಾ
ಲಿಯಾದ. ಸುಗ್ರೀವಇತಿ-ಸುಗ್ರೀವನೆಂದು. ವಿಶ್ರುತಃ-ಪ್ರಖ್ಯಾತಪುರುಷನು, ತಂ-ಆ ಋಶ್ಯಮೂಕಪರ್ವತವನ್ನು. ಅಧ್ಯಾಸ್ತೆ-ಅಧಿಷ್ಠಿಸಿ ಯಿರುತಾನೆ
(ಅಂದರೆ-ಬೆಟ್ಟದಲ್ಲಿವಾಸಮಾಡುತಲಿರುತಾನೆ ) ||೨೬|| ಹೇನರರ್ಷಭ-ಎಲೈ ಪುರುಷಶ್ರೇಷ್ಠನಾದ ಲಕ್ಷ್ಮಣನೇ, ತ್ವಂ-ನೀನು, ಸುಗ್ರೀವಂ-ಸುಗ್ರೀವನೆಂಬ
ವಾನರೇಂದ್ರಂ-ವಾನರಾಧಿಪತಿಯನ್ನು. ಅಭಿಗಚ್ಛ-ಯೆದುರಾಗಿಹೋಗು. ಇತಿ-ಇಂತೆಂದು. ಸತ್ಯವಿಕ್ರಮಂ-ಸತ್ಯವಾದಪರಾಕ್ರಮವುಳ್ಳ, ಲಕ್ಷ್ಮಣಂ-ಲಕ್ಷ್ಮ
ಣನಂಕುರಿತು, ಇತಿ-ಈ ಪರಿಯಾಗಿ, ಪುನಃ-ಮತ್ತು, ವಾಕ್ಯಂ-ಮಾತಿನನ್ನು, ಉವಾಚ-ಹೇಳಿದನು ||೨೭|| ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ. ರಾಜ್ಯ
ಭ್ರಷ್ಟೇನ-ರಾಜ್ಯದಿಂ ಹೊರಡಿಸಲ್ಪಟ್ಟ, ದೀನೇನ-ದರಿದ್ರನಾದ, ತಸ್ಯಾಂ-ಆ ಸೀತಾದೇವಿಯಲ್ಲಿ. ಆಸಕ್ತಚೇತಸಾ-ಆಸಕ್ತವಾದ ಮನವುಳ್ಳ. ಮಯಾ-ನ
ನ್ನಿಂದ, ಸೀತಾಂವಿನಾ-ಸೀತಾದೇವಿಯಂಬಿಟ್ಟು, ಜೀವಿತುಂ-ಬದುಕುವದಕ್ಕೆ. ಕಥಂ-ಹ್ಯಾಗೆ. ಶಕ್ಯಂ-ಸಾಧ್ಯವಾಧೀತು ||೨೮|| ಇತ್ಯೇವಂ-ಈಪರಿಯಾಗಿ
ಮದನಾಭಿಪೀಡಿತಃ-ಕಾಮಗುಣದಿಂ ಬಾಧಿತನಾಗಿ. ಅನನ್ಯಚೇತಸಂ-ಇತರ ಪದಾರ್ಥದಲ್ಲಿ ಮನವಿಲ್ಲದಿರುವ. ಲಕ್ಷ್ಮಣಂ-ಲಕ್ಷ್ಮಣನಂಕುರಿತು. ವಾಕ್ಯಂ-
ಮಾತಿನನ್ನು, ಉಕ್ತ್ವಾ-ಹೇಳಿ. ಶೋಕವಿಷಾದಯಂತ್ರಿತಃ-ಬಾಹ್ಯವ್ಯಸನದಿಂದಲೂ ಮನೋವ್ಯಥೆಯಿಂದಲುಂ ಕಟ್ಟಲ್ಪಟ್ಟ, ರಘೂತ್ತಮಃ-ಆ ಶ್ರೀ
ರಾಮನು. ಮನೋರಮಾಂ-ಮನೋಹರವಾದ, ಪಂಪಾಂ-ಪಂಪಾನದಿಯೆಂಬ, ತಟಿನೀಂ-ಹೊಳೆಯನ್ನು, ವಿವೇಶ-ಹೊಕ್ಕನು ||೨೯|| ತತಃ-ಬಳಿಕ
ಸುದೂರಸಂಕ್ರಮಂ-ಬಹುದೂರವಾಗಿ ಹೋಗುತ್ತಿರುವ. (ಯದ್ವಾ-ಸುದೂರಸಂಕ್ರಮಃ ಇತಿಪಾಠಾಂತರಂ-ರಾಮವಿಶೇಷಣವು, ಬಹುದೂರದದೇಶದಿಂದ
ಬಂದವನಾಗಿ. ) ಪ್ರತಿಕೂಲಧನ್ವನಂ-ಪ್ರತಿಕೂಲವಾದ ನಿರ್ಜನ ಪ್ರದೇಶವನ್ನು, ಕ್ರಮೇಣ-ಕ್ರಮವಾಗಿ, ಗತ್ವಾ-ಹೋಗಿ. ಮಹತ್-ದೊಡ್ಡದಾದ. ವರ್ತ್ಮ-
ಮಾರ್ಗದಲ್ಲಿ, ಶುಭದರ್ಶಕಾನನಾಂ-ಶುಭಕರವಾದ ದರುಶನವುಳ್ಳ ಅರಣ್ಯಗಳುಳ್ಳ, ಅನೇಕನಾನಾವಿಧಪಕ್ಷಿಜಾಲಕಾಂ-ಅನೇಕನಾನಾವಿಧ-ಬಹಳ ಬಗೆಯಾಗಿ
ನಾನಾಬಗೆಯಾದ ಹಕ್ಕಿಗಳ ತಂಡಗಳುಳ್ಳ. ಪಂಪಾಂ-ಪಂಪಾನದಿಯನ್ನು. ದದರ್ಶ-ಕಂಡನು. || ... ... ... ... ||೩೦||

—*** ಇತ್ಯಾರ್ಷೇಶ್ರೀಮದ್ರಾಮಾಯಣೆ ಆದಿಕಾವ್ಯೇ ವಾಲ್ಮೀಕೀಯೇ ಅರಣ್ಯಕಾಂಡೆ-ಪಂಚಸಪ್ತತಿತಮಸ್ಸರ್ಗಃ ***—

—*ಶ್ರೀರಾಮಚಂದ್ರಚರಣಾರವಿಂದಾರ್ಪಣಮಸ್ತು ಅರಣ್ಯಕಾಂಡಸ್ಸಮಾಪ್ತಃ*—

ದುವಾಗಿರುವ ಮರಳಿಂದಯುಕ್ತವಾದದ್ದಾಗಿಯೂ, ಮತ್ತೂ ತಾವರೆಗಳಿಂದಲೂ ಸೌಗಂಧಿಕಾ ಪುಷ್ಪಂಗಳಿಂದ
ಲೂ ಕೂಡಿರುವದಾಗಿಯೂ ಸಹಾ ಇರುವ ಆ ಪಂಪಾನದಿಯಂ ಪುನಃ ಕಂಡು ಲಕ್ಷ್ಮಣನಂ ಕುರಿತಿಂತೆಂದನು ।
ಎಲೈ ಲಕ್ಷ್ಮಣನೇ! ಕಬಂಧನು ಪೇಳಿದಂತೆ, ಗೈರಿಕಾದಿ ಧಾತುಗಳಿಂದಲಂಕೃತವಾದ ಪುಣ್ಯಕರವಾಗಿರುವ ಋಶ್ಯ
ಮೂಕಪರ್ವತವು ಪುಷ್ಪಿಸಿರುವ ವೃಕ್ಷಂಗಳುಳ್ಳದ್ದಾಗಿಧೆ; ಋಕ್ಷರಜಸ್ಸೆಂಬ ವಾನರೇಂದ್ರನ ಪುತ್ರನಾದ ಮಹಾ
ಪರಾಕ್ರಮಿಯಾದ ಸುಗ್ರೀವನು ಇದರಲ್ಲಿ ವಾಸಂಗೈಯ್ಯುತಲಿರ್ಧಾನೆ, ನೀನು ಎದುರಾಗಿ ಪೋಗುವವನಾಗೆಂದು
ನುಡಿದು ಮತ್ತಿಂತೆಂದನು ।೨೭। ಎಲೋ ಎಲೋ, ಅಪ್ಪ ಲಕ್ಷ್ಮಣನೇ! ರಾಜ್ಯಭ್ರಂಶವನ್ನೈದಿದವನಾಗಿಯೂ
ದೀನನಾಗಿಯೂ, ಆ ಸೀತಾದೇವಿಯಲ್ಲಿಯೆ ಆಸಕ್ತವಾದ ಚಿತ್ತವುಳ್ಳವನಾಗಿಯೂ ಸಹಾ ಇರುವ ನಾನು ಆ ದೇ
ವಿಯನ್ನಗಲಿ ಹ್ಯಾಗೆ ಬದುಕಲಾಧೀತು? ಎಂದು ಕಾಮಬಾಧೆಯಿಂದ ನೊಂದವನಾಗಿ ಲಕ್ಷ್ಮಣನಿಗೆ ನಿರೂಪಿಸಿ
ದುಃಖಾತಿಶಯದಿಂದ ಮಹಾ ಮೋಹವನ್ನೈದಿದವನಾಗಿ, ಪಂಪಾನದಿಯನ್ನು ಪ್ರವೇಶಂಗೈದನು।೨೯।ಅನಂತರದ
ಲ್ಲಿ ಶ್ರೀರಾಮನು ಬಹು ದೂರದಲ್ಲಿ ಅಡ್ಡವಾಗಿ ಪೋಗು ನಿರ್ಜನಪ್ರದೇಶವನ್ನು ಕ್ರಮವಾಗಿ ದಾಂಟಿ ದೊಡ್ಡಮಾರ್ಗ
ದಲ್ಲಿ ನೋಡಲಿಂಪಾಗಿರುವ ಅರಣ್ಯಗಳುಳ್ಳದ್ದಾಗಿಯೂ, ಅನೇಕವಿಧವಾದ ಪಕ್ಷಿಗಳ ಸಮೂಹಗಳಿಂದ ವ್ಯಾಪ್ತವಾ
ಗಿಯೂ ಇರುವ ಪಂಪಾನದಿಯಂ ಕಂಡನು ... ... ... ... ... ||೩೦||

ಶ್ರೀಮದ್ವಾಲ್ಮೀಕಿ ಮಹರ್ಷಿ ಪ್ರೋಕ್ತವಾದ ಶ್ರೀಮದ್ರಾಮಾಯಣ ದಲ್ಲಿನ

—** ಅರಣ್ಯಕಾಂಡದಿ ೭೫ನೆಯ ಸರ್ಗಂ ಮುಗಿದುದು **—

—* ಅರಣ್ಯಕಾಂಡವು ಸಮಾಪ್ತವಾದುದು *—

